ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು
ನೂರ ನಲವತ್ತಮೂರನೆಯ ಅಧಿವೇಶನ
ಶುಕ್ರವಾರ, ದಿನಾಂಕ : 05 ನೇ ಫೆಬ್ರುವರಿ, 2021

ಪಶು ಚಿಕಿತ್ಸಾಲಯಗಳ ಬಗ್ಗೆ

ಶ್ರೀ ಪ್ರದೀಪ್ ಶೆಟ್ಟರ್(ಸ್ಥಳೀಯ ಸಂಸ್ಥೆಗಳ ಕ್ಷೇತ್ರ) -

454 (549) ಮಾನ್ಯ ಪಶುಸಂಗೋಪನೆ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ -

(ಅ) ಧಾರವಾಡ, ಗದಗ, ಹಾವೇರಿ ಜಿಲ್ಲೆಯಲ್ಲಿ ಬರುವ ಪಶು ಚಿಕಿತ್ಸಾಲಯಗಳೆಷ್ಟು;

(ಆ) ಎಷ್ಟು ಪಶು ಚಿಕಿತ್ಸಾಲಯಗಳು ಸ್ವಂತ ಕಟ್ಟಡದಲ್ಲಿ ಕಾರ್ಯನಿರ್ವಹಿಸುತ್ತಿವೆ;

(ಇ) 2018 ರಿಂದ 2020 ನೇ ಸಾಲಿನವರೆಗೆ ಪಶು ಚಿಕಿತ್ಸಾಲಯಗಳ ಕಟ್ಟಡಗಳ ನಿರ್ಮಾಣ ಮಾಡಲು ಬಿಡುಗಡೆಯಾದ ಅನುದಾನವೆಷ್ಟು;

(ಈ) ಈ ಮೇಲಿನ ಎಲ್ಲಾ ಪಶು ಚಿಕಿತ್ಸಾಲಯಗಳಿಗೆ ವೈದ್ಯಾಧಿಕಾರಿಗಳನ್ನು ನಿಯೋಜಿಸಲಾಗಿದೆಯೇ;

(ಉ) ಈ ಮೇಲಿನ ಜಿಲ್ಲೆಯಲ್ಲಿ ಖಾಲಿ ಇರುವ ಪಶು ವೈದ್ಯಾಧಿಕಾರಿಗಳ ಹುದ್ದೆ ಭರ್ತಿ ಮಾಡಲು ಕೈಗೊಂಡಿರುವ ಕ್ರಮಗಳೇನು?